


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 30-03-2021 ಪ್ರಶ್ನೆ ಸಂಖ್ಯೆ : 2075(2419)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಆರ್. ಪ್ರಸನ್ನಕುಮಾರ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 30-03-2021

ಉತ್ತರಿಸುವ ಸಚಿವರು: ಮಾನ್ಯ ನಗರಾಭಿವೃದ್ಧಿ ಸಚಿವರು

ವಿಷಯ : ಶಿವಮೊಗ್ಗ ನಗರದಲ್ಲಿ 24x7 ಕುಡಿಯುವ ನೀರಿನ ಕಾಮಗಾರಿಯ ಬಗ್ಗೆ

(ಅ) ಶಿವಮೊಗ್ಗ ನಗರದಲ್ಲಿ 24x7 ಕುಡಿಯುವ ನೀರಿನ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗಿದೆ; ಸದರಿ ಕಾಮಗಾರಿ ಯಾವ ಹಂತದಲ್ಲಿದೆ;

(ಆ) ಕುಡಿಯುವ ನೀರಿನ ಕಾಮಗಾರಿ ಪೂರ್ಣಗೊಳ್ಳಲು ಕೈಗೊಂಡಿರುವ ಕ್ರಮಗಳೇನು; ಮತ್ತು ಕಾಮಗಾರಿ ಪೂರ್ಣಗೊಳ್ಳದಿರಲು ಕಾರಣವೇನು;

(ಇ) ಅಮೃತ್ ಯೋಜನೆಯಲ್ಲಿ ಎಷ್ಟು ಕಾಮಗಾರಿಗಳು ಮಂಜೂರಾಗಿವೇ;

(ಈ) ಅಮೃತ್ ಯೋಜನೆ ಯಾವ ಹಂತದಲ್ಲಿದೇ; (ವಿವರ ನೀಡುವುದು)

(ಉ) ಅಮೃತ್ ಯೋಜನೆಯ ಕಾಮಗಾರಿಯಲ್ಲಿ ಕಳಪೆಯಾಗಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು?